Research Paper | Literature | E-ISSN No : 2454-9916 | Volume : 4 | Issue : 12 | Dec 2018




# SAMAJADALLI MAHILEYA PRAMUKYATHE MATHU STRE SHIKSHANA

Lohit P.

Lecturer, Department of Kannada, Akshara Institute of Management Studies, Shivamogga, Karnataka (State), India.

ಯಾವುದೇ ವಿದ್ಯೆಯಲ್ಲಿ ನಿಪುಣತೆಯನ್ನು ದೊರಕಿಸಿಕೊಡುವ ಕ್ರಮವನ್ನು ಶಿಕ್ಷಣ ಎನ್ನುತ್ತೇವೆ. ಮನುಷ್ಯನಿಗೆ ಶಬ್ದ ಮಾಡಲು, ಕೂಗಲು, ಮಾತನಾಡಲು ಬರುತ್ತದೆ. ಆದರೆ ಅವುಗಳನ್ನು ನಯವಾಗಿ, ತರ್ಕಬದ್ದವಾಗಿ ಚಚರ್ೆ ಮಾಡುವ ನಿಪುಣತೆಯನ್ನು ಪಡೆದರೆ ಅವನು ಭಾಷಣಕಾರನೋ ಸಿದ್ಧಾಂತಿಯೋ ಆಗುತ್ತಾನೆ. ಹಾಗೆ ಆಗುವುದಕ್ಕೆ ಅವನು ತಿಳಿದ ಬಳಿ ಸೇವೆ ಮಾಡುತ್ತಾನೆ, ಅವರಿಂದ ವಿಷಯವನ್ನು ತಿಳಿದುಕೊಳ್ಳುತ್ತಾನೆ, ಕಲಿತಿದ್ದನೂ, ಅಭ್ಯಾಸದಲ್ಲಿ ತರುತ್ತಾನೆ. ಕೊನೆಗೆ ಕರಗತ ಮಾಡಿಕೊಳ್ಳುತ್ತಾನೆ. ಸಹಜ ಬದ್ಧವಾದ ಕಲೆಗೂ ನಿಷ್ಣಾಂತರಿಂದ ಮಾರ್ಗದರ್ಶನ ದೊರಕಿದಾಗ, ಒಂದು ವಿಶೇಷ ರಂಜಕತೆ ಉಂಟಾಗುತ್ತದೆ. ಈ ಶಿಕ್ಷಣ ಎಲ್ಲರಿಗೂ ಬೇಕು. ಶಿಕ್ಷಣದಿಂದ ಏನೂ ಅರೆಯದವನು ಸಾಮಾನ್ಯನಾಗಿ, ಸಾಮಾನ್ಯನು ನಿಪುಣನಾಗಿ, ನಿಪುಣನು ಉತ್ತಮೋತ್ತಮನಾಗಿ ಬೆಳೆಯುತ್ತಾನೆ.

ಪ್ರಪಂಚ ವಿಶಾಲವಾದದ್ದು ಅದು ನದಿ, ಬೆಟ್ಟ, ಕಾಡು, ಸಮುದ್ರಗಳ ಪರಿಸರ ದಿಂದ ಬೇರೆಬೇರೆ ವಾತಾವರಣಗಳಲ್ಲಿ ಹಂಚಿಹೋಗಿದೆ. ಪ್ರಪಂಚದ ಮೂಲೆ ಮೂಲೆಗಳಲ್ಲಿ ಜನ ಇದ್ದರು, ಇದ್ದಾರೆ. ಅವರೆಲ್ಲರೂ ಒಂದೇ ರೀತಿ ಇಲ್ಲ, ಒಂದೇ ಕೈಯ ಐದು ಬೆರಳುಗಳೂ ಒಂದೇ ರೀತಿ ಇಲ್ಲ. ಇನ್ನು ಪ್ರಪಂಚದ ಎಲ್ಲ ಜನ ಒಂದೇ ರೀತಿ ಇರಲು ಹೇಗೆ ಸಾದ್ಯ? ಒಂದು ಮನೆಯವರು ಒಬ್ಬರನ್ನೊಬ್ಬರು ಚೆನ್ನಾಗಿ ಅರ್ಥ ಮಾಡಿಕೊಳ್ಳಬಲ್ಲರು. ನೆರೆಹೊರೆಯವರನ್ನು ಅರ್ಥಮಾಡಿಕೊಳ್ಳಬಲ್ಲರು ದೂರ ದೇಶದವರನ್ನು ಒಬ್ಬರೊಬ್ಬರು ಪರಿಚಯ ಮಾಡಿಕೊಳ್ಳಬಹುದು. ಹೀಗಾಗಿ ಪರಿಚಯದ ತೀವ್ರತೆಯನ್ನು ಅನುಸರಿಸಿ ಜನಗಳು ಗುಂಪುಕಟ್ಟಿಕೊಳ್ಳುವುದು ಸಹಜ. ಇಂಥ ಗುಂಪುಗಳು ಒಂದು ಸಮಾಜ ಎಂದು ಹೇಳಬಹುದು. ಇವುಗಳಲ್ಲೂ ದೊಡ್ಡ ಚಿಕ್ಕ ಎಂಬ ತಾರತಮ್ಯ ಇದ್ದೇ ಇರುತ್ತದೆ. ವ್ಯಕ್ತಿಗಳಿಂದ ಸಮಾಜದ ರೀತಿ ನೀತಿಗಳೇ ಬೇಕು. ಹೀಗೆ ಪ್ರಪಂಚದಲ್ಲಿ ಧಾಮರ್ಿಕವಾಗಿ, ರಾಜಕೀಯವಾಗಿ, ಭೌಗೋಳಿಕವಾಗಿ ನಾನಾ ಸಮಾಜದ ಘಟಕಗಳು. ಕುಟುಂಬದ ವ್ಯಕ್ತಿ ನಗರದ ರಾಜ್ಯದ ದೇಶದ ಬೆಳವಣಿಗೆಗೆ ಪ್ರಗತಿಗೆ ಪ್ರತಿಯೊಬ್ಬನೂ ತನ್ನ ಕರ್ತವ್ಯವನ್ನು ಮಾಡಲೇಬೇಕು.

ಇಂಥ ಶಿಕ್ಷಣ ಯಾರಿಗೆ ಬೇಡ? ಪುರುಷರಿಗೆ ಬೇಕಾದಂತೆ ಸ್ತ್ರೀಯರಿಗೆ ಬೇಡವೇ, ಸ್ತ್ರೀಯರಿಗೂ ಶಿಕ್ಷಣ ಬೇಕು ವಿಶೇಷವಾಗಿ ಚಿಕ್ಕಂದಿನಲ್ಲಿ ಶಿಕ್ಷಣಬೇಕು. ಸ್ತ್ರೀಗೆ ಎಂಥ ಶಿಕ್ಷಣ ಬೇಕು? ಈ ಪ್ರಶ್ನೆ ಎಲ್ಲರಿಗೂ ಸಾಧಾರಣ. ಹಾಗಾದರೆ ಪುರುಷರಿಗೆ ಎಂಥ ಶಿಕ್ಷಣ ಬೇಕು? ಎಲ್ಲರಿಗೂ ಅವರವರ ಜೀವನಗುರಿಯನ್ನು ಕರ್ತವ್ಯವನ್ನು ಸಾಧಿಸುವಲ್ಲಿ ನೆರವಾಗುವ ವಿದ್ಯೆ ಬೇರೆ ಬೇರೆ, ಅಂಥ ವಿದ್ಯೆಯನ್ನು ಪಡೆಯುವುದು ಶಿಕ್ಷಣ ಆಯಾ ಕಾಲಕ್ಕೆ ತಕ್ಕಂಥ ಗುರಿಗಳು ಇರುತ್ತವೆ. ಆ ಗುರಿಸಾಧನೆಗೆ ತಕ್ಕ ಶಿಕ್ಷಣವನ್ನು ಸ್ತ್ರೀಯಾಗಲಿ ಪುರುಷನಾಗಲಿ ಪಡೆದರೆ ಜೀವನ ಉತ್ತಮವಾಗುತ್ತದೆ.

ಹಿಂದಿನ ಬಹು ಹಿಂದಿನ ಕಾಲದಲ್ಲಿ ಹೆಣ್ಣು ಮನೆಯ ಮಹಾಲಕ್ಷ್ಮಿ ಆಗಿದ್ದಳು, ಗೃಹಣಿಯಾಗಿದ್ದಳು. ಒಳ್ಳೆಯ ಪತ್ನಿಯಾಗಿ. ಒಳ್ಳೆಯ ತಾಯಾಗಿ. ಹಾಯಾಗಿ ಬಾಳುವುದಷ್ಟೇ ಅವಳ ಜೀವನದ ಗುರಿಯಾಗಿತ್ತು. ಆದ್ದರಿಂದ ಅವಳು ಗುರುವನ್ನು ಹೊರಗೆಲ್ಲೂ ಹುಡುಕಿಕೊಂಡು ಹೋಗಬೇಕಾಗಿರಲಿಲ್ಲ. ಮನೆಯಲ್ಲಿಯೇ ಅವಳಿಗೆ ಆದರ್ಶ ಗುರು ದೊರೆಯುತ್ತಿದ್ದರು. ತಂದೆ ತಾಯಿಗಳ ನಡೆ, ನುಡಿ, ಆಚಾರ, ವಿಚಾರ, ಸವಾಚಾರಗಳು ಸಂಸ್ಕೃತಿಯ ತಿರುಳನ್ನು ಮಕ್ಕಳಿಗೆ ಪ್ರಾಯೋಗಿಕವಾಗಿ ತೋರಿಸಿಕೊಡುತ್ತಿದ್ದವು. ಒಳ್ಳೆಯ ತಾಯಿಯ ಮಗಳಾಗಿ ತುಂಬುಮನೆಯಲ್ಲಿ ದೊಡ್ಡವರ ಅತಿಥಿಗಳ ಸತ್ಕಾರ, ಸೇವೆ, ಶುಶ್ರೂಷೆಗಳಿಂದ ಸಾಮಾನ್ಯ ಜ್ಞಾನವನ್ನು ಸ್ಪಷ್ಟವಾಗಿ ಪಡೆಯುತ್ತಿದ್ದಳು. ತಾನು ತಾಯಾಗುವಾಗ ಆ ಸಂಸ್ಕೃತಿಯ ತಿರುಳನ್ನು ತನ್ನ ಮಕ್ಕಳಿಗೆ ಹೇಳಿಕೊಡುತ್ತಿದ್ದಳು.

ಮಕ್ಕಳಿಗೆ ತಾಯಿಯೇ ಮೊದಲ ಗುರು. ಪುರುಷನಾಗಲಿ ಸ್ತ್ರೀಯಾಗಲಿ, ತಾಯಿ ಕೈಯ ಬುತ್ತಿಯಿಂದ ಮೈಯನ್ನೂ, ಸುಬುದ್ಧಿಯಿಂದ ಸಂಸ್ಕೃತಿಯನ್ನೂ ರೂಢಿಸಿಕೊಳ್ಳುತ್ತಾರೆ. ಕನ್ನಡದ ಲಕ್ಷ್ಮೀಧರಾಮಾತ್ಯ ಮಹಾಮಾನವನಾಗಿ ಮೆರೆದ. ಅದು ಹೇಗೆ ಸಾಧ್ಯವಾಯಿತು? ಅವನ ಕುರಿತಾದ ಪದ್ಯ ಹೇಳುತ್ತದೆ- ಕೆರೆಯಂ ತೋಡಿಸು.... ತೊಟ್ಟ ನೆರೆದಳ್(ತಾಯ್) ಪಾಲೆರೆವೆಂದು ಕಿವಿಯೊಳ್ ಲಕ್ಷ್ಮೀಧರಾ ಮತ್ಯನಾ.... ಎಂದು ಅವನ ತಾಯಿ, ಅವನಿಗೆ ಬಾಯಲ್ಲಿ ಹಾಲು ಊಡುವಾಗ ಕಿವಿಯಲ್ಲಿ, ಕೆರೆಯನ್ನು ತೋಡಿಸು, ಕಷ್ಟದಲ್ಲಿರುವವರಿಗೆ ಸಹಾಯ ಮಾಡು.... ಇತ್ಯಾದಿಯಾಗಿ ಹೇಳುತ್ತಿದ್ದಳಂತೆ. ಆ ತಾಯಿ ಹಿತನುಡಿಗಳು ಅವನನ್ನು ಸುಸಂಸ್ಕೃತನನ್ನಾಗಿ ಮಾಡಿತು. ಶಿವಾಜಿಯ ದೈವಭಕ್ತಿ, ದೇಶಭಕ್ತಿಗಳಿಗೆ ಅವಳ ತಾಯಿ ಜೀಜಾಬಾಯಿ ನೀಡಿದ ಶಿಕ್ಷಣವೇ ಕಾರಣವಾಯಿತೆಂದು ಓದಿದ್ದೇನೆ-ಹೀಗೆ ಹೆಣ್ಣು ದೇಶದ, ಮನೆಯ ಸಂಸ್ಕೃತಿಯ ರಕ್ಷಕಳಾಗಿ, ನಿರಂತರ ಸಂಸ್ಕೃತಿ ಪ್ರಸಾರದ ಕರ್ತವ್ಯವನ್ನು ಸರ್ಥಕವಾಗಿ ನೆರವೇರಿಸಿಕೊಂಡು ಬಂದಿದ್ದಾಳೆ. ಅವಳಿಗೆ ತನ್ನ ಮನೆಯೇ ಶಾಲೆಯಾಯಿತು. ಕೈಲಾಸು ಹೇಳಿದಂತೆ ಮಕ್ಕಳ ಸ್ಕೂಲ್ ಮನೇಲಲ್ವೇ. ಆ ಶಾಲೆಯಲ್ಲಿ ತಾಯೇ ಮೊದಲ ಗುರು, ಪರಮಗುರು ಅವಳು.

ಪುರುಷರಿಗೆ ವೇದಾಭ್ಯಾಸ, ಧರ್ಮವಿದ್ಯಾಭ್ಯಾಸ, ಶಿಲ್ಪದಿ ಕಲಾಭ್ಯಾಸ, ವ್ಯವಸಾಯ, ವಾಣಿಜ್ಯ ಮುಂತಾದ ವಿಜ್ಞಾನಗಳಲ್ಲಿ ಶಿಕ್ಷಣವನ್ನು ನೀಡಲಾಗುತ್ತಿತ್ತು. ಬ್ರಾಹ್ಮಣ ಕ್ಷತ್ರಿಯ ವೈಶ್ಯ, ಶೂದ್ರರಿಗೆ ಅವರವರ ಕಸುಬಿಗೆ ಯೋಗ್ಯವಾದ ಶಿಕ್ಷಣವನ್ನು ಕೊಡುತ್ತಿದ್ದರು. ಎಲ್ಲರಿಗೂ ಒಂದೇ ಬಗೆಯ ಶಿಕ್ಷಣ ಎಂದೂ ಯಾರೂ ಹೇಳಲಾರರು. ಹಾಗೆಯೇ ಪುರುಷರಂತೆ ಸ್ತ್ರೀಯರೂ ಗುರುಕುಲಗಳಿಗೆ ಹೋಗಿ ವೇದಾಭ್ಯಾಸ ಮಾಡಬೇಕು. ಎಂದಾಗಲಿ, ಧನುವರ್ಿದ್ಯಾಭ್ಯಾಸ ಮಾಡಬೇಕೆಂದಾಗಲಿ ಹೇಳಲಾರರು, ತನ್ನ ಕಾರ್ಯಕ್ಷೇತ್ರ ಪೂರ್ಣವಾಗಿ ಮನೆಯ ನಾಲ್ಕು ಗೋಡೆಗಳ ನಡುವೆ ಅಂಗಳದ ಒಳಗೆ ಇದ್ದುದರಿಂದ ಸ್ತ್ರೀ ಮನೆಯ ಹೊರಗೆ ವಿದ್ಯಾಭ್ಯಾಸಕ್ಕೆ ಹೋಗಬೇಕಾದ ಅವಶ್ಯಕತೆ ಇರಲಿಲ್ಲ. ಆದ್ದರಿಂದ ಸಾಮಾನ್ಯವಾಗಿ ಸ್ತ್ರೀಗೆ ವಿದ್ಯಾಭ್ಯಾಸ ಬೇಕಿಲ್ಲ ಎಂಬ ಮಾತು ಪ್ರಸಿದ್ಧವಾಗಿತು. ಸಾವಿತ್ರಿ, ಮೈತ್ರೇಯ ಮುಂತಾದವರು ಅದನ್ನೂ ಅಭ್ಯಾಸ ಮಾಡಿದ್ದರೆಂಬುದು ಅವರಿಗೆ ಶಿಕ್ಷಣ ನಿಷೇಧಿತವಾಗಿರಲಿಲ್ಲ ಎಂಬುದಕ್ಕೆ ಉದಾಹರಣೆಗಳು, ಇದು ಪ್ರಾಚೀನ ಭಾರತದಲ್ಲಿ ಇದ್ದ ಪದ್ಧತಿ ಸ್ತ್ರೀ ರಾಜ್ಯವಾಳಿದಳು. ಕಾವ್ಯವನ್ನೂ ರಚಿಸಿದಳು ಇದಕ್ಕೆ ಉದಾಹರಣೆಗಳಿವೆ.

ಇತ್ತೀಚೆಗೆ ಪಾಶ್ಚಿಮಾತ್ಯರ ಭಾರತಕ್ಕೆ ಬಂದ ಮೇಲೆ ಇಂಗ್ಲೀಷರು ಇಲ್ಲಿ ರಾಜ್ಯ ಕಟ್ಟಿದ ಮೇಲೆ ಪರಿಸ್ಥಿತಿ ರಾಜಕೀಯ, ಸಾಮಾಜಿಕ ಎರಡೂ ಬಗೆಯ ಪರಿಸ್ಥಿತಿ ಬದಲಾಯಿತು. ಇಂಗ್ಲೀಷರ ನಡೆನುಡಿಗಳ ಅನುಕರಣಕ್ಕೆ ಪ್ರಾರಂಭವಾಯಿತು. ಬ್ರಿಟಿಷರ ಹೆಣ್ಣು ಮಕ್ಕಳು ಗಂಡುಮಕ್ಕಳಂತೆ ಶಿಕ್ಷಣ ಪಡೆಯುತ್ತಾರೆ. ಗೃಹರಕ್ಷಣೆಗೂ ಗೃಹ ವಿಜ್ಞಾನವನ್ನು ಅಭ್ಯಸಿಸುತ್ತಾರೆ ಎಂಬುದನ್ನು ಗಮನಿಸಿದರು. ಅವರೂ ಶಿಕ್ಷಣಕ್ಕೆ ಅರ್ಹರು, ಅವರಿಗೂ ಶಿಕ್ಷಣವನ್ನು ಕೊಡಬೇಕು ಎಂಬ ಭಾವನೆ ಬೆಳೆಯಿತು. ಓದು ಬರಹ, ಸ್ವಂತ ವಿಚಾರಕ್ಕೆ ಪ್ರೋತ್ಸಾಹ ದೊರಿಯಿತು. ಸ್ತ್ರೀಯು ಶಾಲೆಗಳಿಗೆ ಹೋಗೆ ಬರಲು ಮೊದಲು ಮಾಡಿದಳು, ಸ್ತ್ರೀಯ ವ್ಯಾಪ್ತಿ ಮನೆಯ ಹೊರಗೂ ವ್ಯಾಪಿಸಿತು. ಜ್ಞಾನಾರ್ಜನೆಗಾಗಿ, ನೈಪುಣ್ಯಪ್ರಾಪ್ತಿಗಾಗಿ, ಕಲಾಕುಶಲತೆಗಾಗಿ ಸ್ತ್ರೀ ಶಿಕ್ಷಣ ರೂಢಿಗೆ ಬಂದಿತು.

ಆಧುನಿಕತೆ, ವಿಜ್ಞಾನದ ಆವಿಷ್ಕರನಗಳಿಂದಾಗಿ ಭಾರತೀಯ ಕುಟುಂಬದ ವ್ಯವಸ್ಥೆ ಬದಲಾಯಿತು. ತುಂಬಿ ನಿಂತಿರುತ್ತಿದ್ದ ಕುಟುಂಬಗಳು ವಿಭಕ್ತವಾದವು. ಮನೆಯೇ ಒಂದು ಕಿರು ಸಮಾಜದಂತಿದ್ದ ಪರಿಸರ ದೂರವಾಯಿತು. ಸಮಾಜದ ಪರಿಚಯಕ್ಕೆ ಗಂಡಾಗಲಿ ಹೆಣ್ಣಾಗಲಿ ಮನೆಯ ಹೊರಗೆ, ಶಾಲೆಯಲ್ಲಿ, ಕಾಲಕಳೆಯ ಬೇಕಾಯಿತು. ಬರಬರುತ್ತಾ ಸ್ತ್ರೀಯು ತನ್ನ ಕಾಲಮೇಲೆ ತಾನು ನಿಲ್ಲುವ ಸಾಮರ್ಥ್ಯವನ್ನು ಪಡೆದಿರಬೇಕು ಎಂಬ ವಿಚಾರ ಬೆಳೆಯಿತು. ಗಂಡ ಸತ್ತಾಗೆ ಹೆಣ್ಣು ತಾನೂ ಗಂಡನ ಜೊತೆಯಲ್ಲಿ ಸಾಯುತ್ತಿದ್ದಳು, ಸಹಗಮನದ ರೂಢಿಯಿತ್ತು. ಅದನ್ನು ಸಮಾಜ ಕ್ರೂರವೆಂದು ಬಗೆಯಿತು, ರಾಜಾ ರಾಮಮೋಹನರಾಯ್ ಮುಂತಾದವರು ಆ ದುಷ್ಟಪದ್ಧತಿಯನ್ನು ನಿಲ್ಲಿಸಿ, ಸ್ತ್ರೀಯ ವಿದ್ಯಾಭ್ಯಾಸಕ್ಕೆ ಸಾಕಷ್ಟು ಪ್ರೋತ್ಸಾಹ ಕೊಟ್ಟರು. ಜ್ಞಾನಾರ್ಜನೆಗಾಗಿಯೇ ಶಿಕ್ಷಣದ ಪಡೆಯುತ್ತಿದ್ದ ಸ್ತ್ರೀ ಈಗ ಧನಾರ್ಜನೆ ಕೈಚಾಚಿದಳು. ಅದಕ್ಕೆ ಬೇಕಾದ ಯಾಂತ್ರಿಕ ತಾಂತ್ರಿಕ ಶಿಕ್ಷಣವನ್ನು ಪಡೆಯಲೂ ಮುಂದಾದಳು.

ಇಂದಿನ ಸಂಸಾರದಲ್ಲಿ ಗಂಡ ಹೆಂಡಿರು ಇಬ್ಬರೂ ಸಮಭಾಗಿಗಳಾಗಿರುತಿದ್ದಾರೆ. ಒಬ್ಬರಗಳಿಗೆ ಸಾಲವೆಂಬ ಭಾವನೆ ಬಂದಿದೆ. ಗಂಡು ಹೆಣ್ಣು ಎರಡೂ ಗಳಿಸುವ ಯತ್ನಮಾಡಬೇಕಾಗಿದೆ. ಅನೇಕ ಮಧ್ಯಮ ವರ್ಗದ ಕುಟುಂಬಗಳಲ್ಲಿ ಸ್ತ್ರೀಯುಗಳಿಸದಿದ್ದರೆ ಜೀವಂತ ಉಳಿಯುವಂತೆ ಇಲ್ಲ. ಹೀಗಾಗಿ ಇಂದು ಸ್ತ್ರೀಯು ಉದ್ಯೋಗ ಗಳಿಕೆಗಳಿಗಾಗಿ ಶಿಕ್ಷಣವನ್ನು ಪಡೆಯಬೇಕಾಗಿದೆ.

ವೈದ್ಯಕೀಯ, ಇಂಜಿನಿಯರಿಂಗ್, ಪಾಲಿಟೆಕ್ನಿಕ್, ಶಿಕ್ಷಣ, ವಾಣಿಜ್ಯ, ವ್ಯಾಪಾರ ಎಲ್ಲ ಬಗೆಯ ವೃತ್ತಿಗಳಲ್ಲೂ ಸ್ತ್ರೀಯು ಇಂದು ವ್ಯಾಸಂಗ ಮಾಡುತ್ತಿದ್ದಾಳೆ, ತರಬೇತಿ ಪಡೆಯುತ್ತಿದ್ದಾಳೆ. ಎಷ್ಟೋ ವೇಳೆ ಪುರುಷನಿಗಿಂತ ಒಂದು ಕೈಮೇಲೆ ಎನ್ನಿಸಿಕೊಂಡಿದ್ದಾಳೆ. ಸ್ತ್ರೀ ಸುಶಿಕ್ಷಿತಳಾಗಿ ಎಲ್ಲಾ ಕ್ಷೇತ್ರಗಳಲ್ಲೂ ಕಾಲಿಟ್ಟಿದ್ದಾಳೆ. ಇಂದು ಪೋಲೀಸ್ ಇಲಾಖೆಯಲ್ಲೂ, ಹಿಮಾಚಲವನ್ನು ಏರುವ ಕಷ್ಟಸಾಧ್ಯ ಕೃತಿಯಲ್ಲೂ ಸೈಯೆನಿಸಿ ಕೊಂಡಿದ್ದಾಳೆ. ಭಾರತದ ಪ್ರಧಾನಿಪಟ್ಟವನ್ನು ಹಾಗೂ ರಾಷ್ಟ್ರಪತಿ ಪಟ್ಟವನ್ನು ಅಲಂಕರಿಸಿ, ವಿಶ್ವದ ಮೆಚ್ಚುಗೆಗೆ ಪಾತ್ರಳಾಗಿದ್ದಾಳೆ. ಇವೆಲ್ಲ ಸ್ತ್ರೀ ಶಿಕ್ಷಣದ ವರಪ್ರಸಾದವೇ ಆಗಿದೆ.

ಹೀಗೆ ಮನೆಯಲ್ಲಿಯೇ ಇದ್ದು, ಗಂಡಸಿನ ಆಶ್ರಯವಿಲ್ಲದೆ ತಾನು ಬದುಕಲಾರಳು. ಅನಾಥಳು, ಅಬಲಳು ಎನ್ನಿಸಿಕೊಂಡಿದ್ದಳು. ಅವಳು ಇಂದು ಮನೆಯೊಳಗೆ, ಹೊರಗೆ ಎರಡೂ ಕಡೇ, ಜೀವನವನ್ನು ಎದುರಿಸುತ್ತಿದ್ದಾಳೆ. ಮನೆಯಲ್ಲಿ ಯೋಗ್ಯ ಗೃಹಿಣಿ ಯಾಗಿಯೂ ಹೊರಗಡೆ ಸಭ್ಯನಾಗರಿಕಳಾಗಿಯೂ ಬಾಳುತ್ತಿದ್ದಾಳೆ ಸಬಲಲಾಗಿದ್ದಾಳೆ ಸಫಲಳಾಗಿದ್ದಾಳೆ.

ಅಜರ್ುನನಂತೆ ಸವ್ಯಸಾಚಿಯಾಗಿ ಸಂಸಾರದ ರಥವನ್ನು ಸಾಗಿಸುತ್ತಾಳೆ ಎಂದರೆ ಅತಿಶಯೋಕ್ತಿಯಲ್ಲ.

ಪುರುಷರು ಮನೆಯ ಹೊರಗೆ ದುಡಿದು, ಓಡಾಡಿ, ಹೋರಾಡಿ, ಸಮಾಜದ ರಕ್ಷಣೆ ಮಾಡಬೇಕು. ಸ್ತ್ರೀಯರು ಮನೆಯ ಒಳಗೆ ದುಡಿದು ಕುಟುಂಬದ ರಕ್ಷಣೆಯ ಹೊಣೆಯನ್ನು ಹೊರಬೇಕು ಎಂಬ ಸ್ಥೂಲಪದ್ಧತಿ ಹಿಂದಿನ ಭಾರತದಲ್ಲಿ ಇತ್ತು. ಸ್ತ್ರೀ ಮನೆಯ ಒಡತಿ ಆಗಿದ್ದಳು. ಮಾತೃದೇವೋಭವ ಎಂದರು ನಮ್ಮ ಹಿರಿಯರು, ತಾಯಿ ದೇವರೆಂದು, ಮಕ್ಕಳಿಗೆ ತಾಯಿ ತಂದೆಯೇ ದೇವರು. ಹೊರಗೆ ದುಡಿವ ಗಂಡಸಿಗೆ ಮನೆಯಲ್ಲಿ ನೆಮ್ಮದಿ ಸಿಕ್ಕಬೇಕಾದರೆ ಪತ್ನಿಯ ಸಹವಾಸದಿಂದ ಗೃಹಿಣಿ ಇದ್ದ ಮನೆಬೆಳಗುತ್ತದೆ. ಗೃಹಣಿ ಇಲ್ಲದ ಮನೆ ಆಳುತ್ತದೆ ನಿಜ. ಆದ್ದರಿಂದಲೇ ಗೃಹಿಣಿಯೇ ಗೃಹ ಎಂದರು ಮನೆಯ ಪೂರ್ಣ ಹೊಣೆಗಾರಿಕೆ ಅಲ್ಲದಿದ್ದರೂ, ಬಹುಪಾಲು ಹೊಣೆಗಾರಿಕೆ ಆಕೆಯದಾಗಿತ್ತು. ನೃಪತುಂಗ ಶ್ರೀ ವಿಜಯರು ಕುರಿತೋಧನೆಯಂ ಕಾವ್ಯ ಪ್ರಯೋಗ ಪರಿಣತಮತೋಳ್ ಎಂದು ಕನ್ನಡದ ಜನರನ್ನು ಕವಿರಾಜ ಮಾರ್ಗದಲ್ಲಿ ವಿವರಿಸಿದರು. ಈ ಮಾತು ಸ್ತ್ರೀಯರಿಗೂ ಅನ್ವಯಿಸುತ್ತದೆ. ಆ ಹೆಣ್ಣಿನ ಬುದ್ಧಿಶಕ್ತಿ ಚುರುಕಾದದ್ದು ಸ್ತ್ರೀ ಬುದ್ಧಿ ಪ್ರಳಯಾಂತಕಃ ಎನ್ನುವ ಗಾದೆಯೂ ಇದೆ. ಅಂಥ ಹೆಣ್ಣು ಓದದೆಯೂ, ಸಂಸ್ಕೃತಿಯ ತಿರುಳನ್ನು ಅರ್ಥಮಾಡಿಕೊಂಡು ಆಚರಿಸುತ್ತಿದ್ದಳು, ಕಾಪಾಡಿಕೊಂಡು ಬರುತ್ತಿದ್ದಳು. ಗಾಗರ್ಿ, ಮೈತ್ರೇಯಿ, ಸಾವಿತ್ರಿ ಮುಂತದವರು ಸಕ್ರಮ ವಿದ್ಯಾಭ್ಯಾಸವನ್ನು ಮಾಡಿದ್ದರು ಎಂದು ಕೇಳಿದ್ದೇವೆ. ಆದರೆ ಸ್ತ್ರೀಯರ ಮುಖ್ಯಗುರಿ ಒಳ್ಳೆಯ ತಾಯಾಗಿ ಬಾಳುವುದೇ ಆಗಿತ್ತು. ಸಾಮಾನ್ಯವಾಗಿ ಸ್ತ್ರೀ ಮನೆಯ ಯಜಮಾನಿಯಾಗಿದ್ದಳು. ಯಜಮಾನರು ಹೆಚ್ಚು ಕೆಲಸ ಮಾಡಬೇಕಾಗಿ ಬರುವುದಿಲ್ಲವೆ? ಅವರಿಗೆ ಅದು ಹೀನಾಯವೇನಲ್ಲ! ಮೇಲಾಗಿ ಹೆಮ್ಮೆಯ ಮಾತಾಗುತ್ತದೆ, ಸ್ತ್ರೀಯ ಮನೆಯೊಡತಿಯ ಪಾಡೂ ಹಾಗೇ ಆಗಿತ್ತು. ಯತ್ರನಾರ್ಯಸ್ತು ಪೂಜ್ಯಂತೇ, ರಮಂತೇ ತತ್ರ ದೇವತಾಃ ಎಂದು ನಮ್ಮ ಪೂರ್ವಿಕರು ಸಾರಿದರು, 'ಎಲ್ಲಿ ನಾರಿಗೆ ಗೌರವ ಇದೆಯೋ, ಅಲ್ಲಿ ದೇವತೆಗಳು ವಾಸ ಮಾಡುತ್ತಾರೆ' ಎಂದರು.

ಕೆಲವರು ಆಕೆಯನ್ನು ತುಚ್ಚವಾಗಿ ಕಂಡರೂ ಉಂಟು. ದೈಹಿಕವಾಗಿ ಕೋಮಲೆಯಾದ ಅವಳನ್ನು 'ಅಬಲೆ' ಎಂದು ತಿಗಳಿದವರು ಕೆಲವರು. ಸಾಮಾಜಿಕ ಸ್ವಚ್ಚತೆಯ ದೃಷ್ಟಿಯಿಂದ ಹೆಂಗಸನ್ನು ಪವಿತ್ರಳೆಂದವರು, ಅವಳನ್ನು ಎಚ್ಚರಿಕೆಯಿಂದ ಕಾಪಾಡಿಕೊಳ್ಳತೊಡಗಿದರು. ಒಂದು ದೃಷ್ಟಿಯಲ್ಲಿ ಅದು ಪಂಜರದ ವಾಸವಾಯಿತು. ಸಂಶಯ ಮನೆಯಾಯಿತು. ಬರಬರುತ್ತ ಸ್ತ್ರೀಯನ್ನು ಶಂಕಿಸುವುದು ಹೆಚ್ಚಾಯಿತು. ಒಂದಾನೊಂದು ಕಾಲದಲ್ಲಿ ಪತಿಯ ಮರಣದೊಡನೆ ಪ್ರಪಂಚ ಶೂನ್ಯವೆಂದು ಕಂಡಾಗ ಸ್ತ್ರೀಯು ಸ್ವ- ಇಚ್ಛೆಯಿಂದ ಸಹಗಮನ ಮಾಡುತಿದ್ದಳು. ಮುಂದೆ ಅದೇ ಪದ್ಧತಿಯಾಗಿ ಬೇಡದವರನ್ನೂ ಇನ್ನೂ ಪ್ರಪಂಚದಲ್ಲಿ ಬಾಳಬೇಕೆಂಬ ಆಸೆಯಿರುವವರನ್ನೂ ಬಲವಂತವಾಗಿ 'ಸತಿ' ಹೋಗಿಸುವ ಪದ್ಧತಿ ಬೆಳೆಯಿತು. ಈಗ ಅದು ದುಷ್ಟ ಪದ್ಧತಿಯೆಂದು ಕೊನೆಗಂಡಿದೆ, ರಾಜಾಜ್ಞೆಯಾಗಿದೆ. ಹೀಗೆ ಒಂದು ಕಾಲಕ್ಕೆ ಸಮಾಜದ ಹಿತವನ್ನು ರಕ್ಷಿಸುವ ಪದ್ಧತಿಗಳೇ ಮುಂದೆ ಅನಾವಶ್ಯಕವಾದಾಗ ಕುರುಡು ನಂಬಿಕೆಗಳಾಗುತ್ತವೆ. ಸಮಾಜ ಎಚ್ಚತ್ತು ಕಾಲಕ್ರಮದಲ್ಲಿ ಆ ಪದ್ಧತಿಗೆ 'ಇತಿಶ್ರೀ' ಯನ್ನು ಹಾಡುತ್ತದೆ. ಸ್ತ್ರೀ ಮನೆಯ ನಾಲ್ಕು ಗೋಡೆಗಳ ನಡುವೆಯೇ ಇರಬೇಕು, ಅಳಬೇಕು,ಅಳಿಯಬೇಕು. ಎಂಬ ಪರಿಸ್ಥಿತಿ ಈಗ ದೂರವಾಗುತ್ತದೆ. ಮಹಿಳೆ ನಾರಿಯೂ ಹೌದು ಮಾರಿಯೂ ಹೌದು, ಸ್ತ್ರೀಯ ಪಾತ್ರ ಮನೆಯ ಒಳಗೂ ಹೊರಗೂ ಅನಿವಾರ್ಯ.

ಗಂಡಸಿಗೇಕೆ ಗೌರಿಯ ದುಃಖ ಎಂದು ಹೆಂಗಸಿನ ಕಷ್ಟ ನಷ್ಟಗಳಿಗೆ ಅವಳನ್ನೇ ಗುರಿಮಾಡಿ, ಅವಳನ್ನೇ ಹೊಣೆಗೇಡು ಮಾಡುವುದು ಸರಿಯಲ್ಲ ಎಂಬ ಭಾವನೆ ಈಚೆಗೆ ದೃಢಗೊಳ್ಳುತ್ತಿದೆ. ಕುಟುಂಬದ ಹೊಣೆಗಾರಿಕೆಯಲ್ಲಿ ಹೆಣ್ಣು ಗಂಡುಗಳಿಬ್ಬರು ಸಮವಾಗಿ ಪಾಲುದಾರರು. ಸಮಯ ಬಂದರೆ ಹೆಣ್ಣು ಹೊರಗೂ ದುಡಿಯಬಲ್ಲಳು ಎಂಬುದನ್ನುತೋತಿಸಿದ್ದಾಳೆ. ಗಂಡಸು ಅಡುಗೆ ಮನೆಯಲ್ಲೂ ಸಹಾಯಕನಾಗಬಲ್ಲ ಎಂಬುದನ್ನು ತೋರಿಸಿದ್ದಾನೆ. ಇಂದು ಹೆಣ್ಣು ಸಮಾಜದಲ್ಲಿ, ಮನೆಯ ಒಳಗೂ ಹೊರಗೂ ದುಡಿಯಬಲ್ಲವಳಾಗಿದ್ದಾಳೆ. ಸಮುದ್ರ ಪ್ರಮಾಣ ಪರ್ವತಾರೋಹಣ, ಆಕಾಶಯಾನ ಇಂಥ ಕಠಿಣ ಪ್ರಸಂಗಗಳನ್ನೂ ದಿಟ್ಟಳಾಗಿ ಎದುರಿಸುತ್ತಿದ್ದಾಳೆ. ಆಕೆ ದೈಹಿಕವಾಗಿಯೂ ಮಾನಸಿಕವಾಗಿಯೂ ಸಬಲಳು. ಗುಂಡಿಗಿಂತ ಒಂದು ಕೈ ಹೆಚ್ಚಿನ ಧೈರ್ಯವಂತಳೂ, ಸ್ಯೆರಣೆಯುಳ್ಳವಳು ಎಂದರೂ ತಪ್ಪಿಲ್ಲ. ಝಾನ್ಸಿ ರಾಣಿ ಲಕ್ಷ್ಮೀ ಬಾಯಿ, ಒನಕೆಯ ಓಬವ್ವಳ ಧೈರ್ಯವನ್ನು ಅನುಸರಿಸುವ ಗಂಡಸರಾದರೂ ಎಷ್ಟು ಮಂದಿ? ಇಂದಿಗೂ ಪುರುಷರ ದಬ್ಬಾಳಿಕೆ, ವರದಕ್ಷಿಣೆಯ ಪಿಡುಗಿಗೆ, ನೀಚ ಕಾಮುಕರ ನೀಚ ವರ್ತನೆಗಳಿಗೆ ತುತ್ತಾಗುತ್ತಿದ್ದಳೆ. ಆದರೆ ಇಂದು ಹೆಣ್ಣು ಎಚ್ಚರಗೊಂಡಿದ್ದಾಳೆ. ತನ್ನನ್ನು ತಾನೇ ಕಾಪಾಡಿಕೊಳ್ಳಲೂ ಸಿದ್ಧಳಾಗುತ್ತಿದ್ದಾಳೆ. ಒಂದು ಕಾಲದಲ್ಲಿ ಗಂಡಸಿನ ದರ್ಪ ದಬ್ಬಾಳಿಕೆಗಳು ಬೇಕಾಗಿದ್ದುವೇನೋ, ಅಥವಾ ಹಿತವಾಗಿತ್ತೇನೋ ಈಗ ಆ ಭಾವನೆಗಳೂ ಪರಿಸರಗಳೂ ಮಾಯವಾಗಿವೆ. ಆ ಪದ್ಧತಿಗಳು ಹೆಣ್ಣು ಕಡಿಮೆ ಎನ್ನುವ ಭಾವ ಅಳಿಯುತ್ತಿದೆ. ಅಲ್ಲಲ್ಲಿ ಇದಕ್ಕೆ ವಿರುದ್ಧವಾದ ಉದಾಹರಣೆಗಳು ಸಿಗಬಹುದು. ಆದರೆ ಹಳೆಯ ಪದ್ಧತಿಯೊಂದು ಸಾಯಬೇಕಾದರೆ, ಕಾಯಬೇಕು. ಆ ಕಾಲ ಸನ್ನಿಹಿತವಾಗುತ್ತಿದೆ. ಪುರುಷನ ಅಹಂಕಾರ ಕಡಿಮೆಯಾಗುತ್ತಾ ಬಂದು ಸ್ತ್ರೀಯ ಸ್ವಾಭಿಮಾನ ಹೆಚ್ಚುತ್ತಾ ಬಂದು ಒಂದು ಹಂತದಲ್ಲಿ ಇಬ್ಬರೂ ಪರಸ್ಪರ ಅರಿತುಕೊಳ್ಳುತ್ತಾರೆ ಆ ಕಾಲ ಬೇಗ ಬರಲಿದೆ ಅನುಮಾನವಿಲ್ಲ.

ಭವಿಷ್ಯದ ಸಮಾಜದಲ್ಲಿ ಸ್ತ್ರೀಯ ಪಾತ್ರ ಅತ್ಯಂತ ಮಹತ್ವದ್ದಾಗಿದೆ. ರಾಜಕೀಯವಾಗಿಯೂ ಆಕೆ ವಿಷಯಗಳನ್ನು ಅರಿಯುತ್ತಿದ್ದಾಳೆ. ಮನೆಯ ವ್ಯವಹಾರ ಮಾತ್ರವಲ್ಲ ದೇಶದ ವ್ಯವಹಾರದಲ್ಲಿ ತನ್ನ ಅಭಿಪ್ರಾಯವನ್ನು ಮಂಡಿಸಬಲ್ಲವಳಾಗಿದ್ದಾಳೆ. ಪ್ರಧಾನಿಯಾಗಿದ್ದ ಶ್ರೀಮತಿ ಇಂದಿರಾಗಾಂಧಿಯವರು ಅಂತರಾಷ್ಟ್ರೀಯ ವ್ಯವಹಾರಗಳಲ್ಲಿ ಎಂಥ ಚಾಣಾಕ್ಷತನದಿಂದ ವ್ಯವಹರಿಸುತ್ತಿದ್ದರು ನೋಡಿ. ಎಲ್ಲರೂ ಮೂಗಿನ ಮೇಲೆ ಬೆರಳಿಟ್ಟು ಕೊಳ್ಳುವಂತೆ ಅಲ್ಲವೇ? ಇಂದಿನ ಸ್ತ್ರೀ ವಿದ್ಯಾಭ್ಯಾಸದಲ್ಲಿ ಅವಳ ಗಾತ್ರವೇ ಮುಖ್ಯ. ದೇಶದ ಸಮಸ್ಸೆಗಳನ್ನು ಅರ್ಥಮಾಡಿಕೊಳ್ಳಬಲ್ಲವಳಾಗಿದ್ದಾಳೆ. ಕುಟುಂಬ ನಿಯಂತ್ರಣದಂಥ ಸೂಕ್ಷ್ಮವಿಚಾರಗಳಲ್ಲೂ ಆಕೆ ಜವಾಬ್ದಾರಿಯುತಳಾಗಿದ್ದಾಳೆ. ಕಷ್ಟಗಳನ್ನು ದಿಟ್ಟತನದಿಂದ ಎದುತಿಸುತ್ತಿದ್ದಾಳೆ. ಮನೆಯಲ್ಲಿ ಮಕ್ಕಳಿಗೆ ತಾಯಾಗಿ, ಗಂಡನಿಗೆ ಜೊತೆಯಾಗಿ ಹೊರಗೆ ದುಡಿಯುವ ಹೆಣ್ಣು ಮೂರು ಬಗೆಯ ಕೆಲಸದಲ್ಲಿ ಸಮರ್ಥಳಾಗಿದ್ದಾಳೆ. ಸರಸ್ವತಿ, ಲಕ್ಷ್ಮಿ, ಪಾರ್ವತಿಯರೊಂದಿಗೆ ಶಕ್ತಿಯಾದಂತೆ ಆಗಿದ್ದಾಳೆ.

ಸಮಾಜ ಮಾನವೀಯ ಮೌಲ್ಯಗಳನ್ನು ಕಾಪಾಡಿಕೊಂಡು ಬರಬೇಕು. ಭವ್ಯ ಪರಂಪರೆಯನ್ನು ಮತ್ತಷ್ಟು ಉಜ್ವಲಗೊಳಿಸಿ ಮುಂದಿನ ಪೀಳಿಗೆಗೆ ಧಾರೆಯರೆದು ಕೊಡಬೇಕು. ಈ ಕೆಲಸವನ್ನು ಮಾಡುವಲ್ಲಿ ಸ್ತ್ರೀಯ ಪಾತ್ರ ಮಾಹತ್ವದ್ದಾಗಿದೆ. ಹಿಂದಿಗಿಂತ ಇಂದು ಆಕೆಯ ಪಾತ್ರ ಬಹುಮುಖವಾಗಿದೆ. ಬಹಳ ಹಿಂದೆಯೇ ಕವಿಯಿತ್ರಿ ಸಂಚಿಯ ಹೊನ್ನಮ್ಮ ಹೀಗೆ ಹೇಳಿದ್ದಳು.

ಕುವರನಾದೊಡೆ ಬಂದ ಗುಣವೇನದರಿಂದ
ಕುವರಿಯಾದೊಡನೆ ಕುಂದೇನು?
ಇವರೀರ್ವರೊಳೇಳಿಗೆವಡೆದವರಿಂದ
ಸವನಿಪುದಿಹಪರ ಸೌಖ್ಯ

ನಮ್ಮ ಭಾರತದ ಸಂಸ್ಕೃತಿ ಇನ್ನೂ ಜೀವಂತವಾಗಿ ಉಳಿದಿರುವುದು ಹೆಣ್ಣಿನ ಒಂದು ಸ್ಥೈರ್ಯದಿಂದಲೇ ಎಂದು ನಿಸ್ಸಂಶಯವಾಗಿ ಹೇಳಬಹುದು.

**-: ಆಧಾರ ಗ್ರಂಥ :-**


- ಮಹಿಳೆ - ಜ್ಯೋತ್ಸ್ನಾ ಕಾಮತ್, ನವಕನರ್ಾಟಕ ಪಕಾಶನ.
- All Kannada Daily News papers and magazine.
- Internet
- The Hindu (English) Paper